


# ಕರ್ನಾಟಕ ವಿಧಾನಪರಿಷತ್ತು

ನೂರ ನಲವತ್ತ ಮೂರನೆಯ ಅಧಿವೇಶನದ ಮುಂದುವರೆದ ಉಪವೇಶನ

**ಚುಕ್ಕೆ ರಹಿತ ಪ್ರಶ್ನೆ**

ದಿನಾಂಕ : 19-03-2021 ಪ್ರಶ್ನೆ ಸಂಖ್ಯೆ : 1432 (1661)

0ಸದಸ್ಯರ ಹೆಸರು ಮತ್ತು ಕ್ಷೇತ್ರ : ಶ್ರೀ ಎಂ.ಎ. ಗೋಪಾಲಸ್ವಾಮಿ (ಸ್ಥಳೀಯ ಸಂಸ್ಥೆಗಳ ಕ್ಷೇತ್ರ)

ಉತ್ತರ ನೀಡಬೇಕಾ.ದ ದಿನಾಂಕ : 19-03-2021

ಉತ್ತರಿಸುವ ಸಚಿವರು: ಮಾನ್ಯ ಕೃಷಿ ಸಚಿವರು

ವಿಷಯ : ಕೋವಿಡ್-19 ಕಾಯಿಲೆಯ ಪರಿಣಾಮಗಳಿಂದ ರೈತರಿಗೆ ಆಗಿರುವ ನಷ್ಟದ ಬಗ್ಗೆ

(ಅ) ಕೋವಿಡ್-19 ಕಾಯಿಲೆಯ ಪ್ರಭಾವದಿಂದ ರೈತರು ಬೆಳೆದ ಬೆಳೆಗಳು ಖರೀದಿಯಾಗದೆ, ರಾಜ್ಯದ ಸಾವಿರಾರು ರೈತರು ಸಂಕಷ್ಟಕ್ಕೆ ಒಳಗಾಗಿದ್ದು, ಈ ಸಂದರ್ಭದಲ್ಲಿ ರೈತರಿಗೆ ಸಹಾಯವಾಗುವಂತೆ ಸರ್ಕಾರವು ಯಾವುದಾದರೂ ಪರಿಹಾರಗಳನ್ನು ಘೋಷಿಸಿದೆಯೇ; ಘೋಷಿಸಿದ್ದಲ್ಲಿ, ಪರಿಹಾರದ ವಿವರಗಳನ್ನು ನೀಡುವುದು;

(ಆ) ಇದರಲ್ಲಿ, ಹಾಸನ ಜಿಲ್ಲೆಗೆ ಬಿಡುಗಡೆಯಾದ ಅನುದಾನವೆಷ್ಟು; ಈ ಪರಿಹಾರ ಪಡೆದ ರೈತರ ಸಂಖ್ಯೆ ಎಷ್ಟು; (ತಾಲ್ಲೂಕುವಾರು ಮಾಹಿತಿ ನೀಡುವುದು)

(ಇ) ಮೆಕ್ಕೆಜೋಳ ಬೆಳೆದು ಸಂಕಷ್ಟಕ್ಕೀಡಾಗಿರುವ ರೈತರಿಗೆ ತಲಾ ರೂ.5,000 ರಂತೆ ಪರಿಹಾರ ನೀಡುವ ಯೋಜನೆಯನ್ನು ಸರ್ಕಾರವು ಅನುಷ್ಠಾನಗೊಳಿಸಿದೆಯೇ; ಹಾಗಿದ್ದಲ್ಲಿ, ಹಾಸನ ಜಿಲ್ಲೆಗೆ ಈ ಯೋಜನೆಯಡಿ ಬಿಡುಗಡೆ ಮಾಡಲಾದ ಅನುದಾನವೆಷ್ಟು? (ಈ ಅನುದಾನವನ್ನು ಪಡೆದಿರುವ ಫಲಾನುಭವಿಗಳ ವಿವರವನ್ನು ತಾಲ್ಲೂಕುವಾರು ನೀಡುವುದು)